# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1578

ಸದಸ್ಯರ ಹೆಸರು : ಡಾ: ಚಂದ್ರಶೇಖರ್ ಬಿ. ಪಾಟೀಲ್ (ಪದವೀಧರರ ಕ್ಷೇತ್ರ)

ಉತ್ತರಿಸುವ ದಿನಾಂಕ : 24-09-2021.

ಉತ್ತರಿಸುವವರು : ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು.

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಬೆಂಗಳೂರು ನಗರ ಜಿಲ್ಲೆಯ ಬೆಂಗಳೂರು ಉತ್ತರ ತಾಲ್ಲೂಕಿನಲ್ಲಿ ಪುರಸಭೆ ಮತ್ತು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ಪರಿವರ್ತಿತವಾದ ಗ್ರಾಮ ಪಂಚಾಯಿತಿಗಳೆಷ್ಟು; ಸದರಿ ಗ್ರಾಮ ಪಂಚಾಯಿತಿಗಳು ಹಸ್ತಾಂತರವಾದ ದಿನಾಂಕ ಯಾವುವು; (ಗ್ರಾಮ ಪಂಚಾಯಿತಿವಾರು, ಗ್ರಾಮವಾರು ಪ್ರತ್ಯೇಕವಾಗಿ ವಿವರವನ್ನು ನೀಡುವುದು) | ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಉತ್ತರ ತಾಲ್ಲೂಕಿನ (1) ಲಕ್ಷ್ಮೀಪುರ (2) ಶ್ರೀಕಂಠಪುರ (3) ಚಿಕ್ಕಬಿದರಕಲ್ಲು ಗ್ರಾಮ ಪಂಚಾಯಿತಿಗಳು ಮಾದನಾಯಕನಹಳ್ಳಿ ನಗರಸಭೆಗೆ ಸೇರ್ಪಡೆಯಾಗಿರುತ್ತವೆ.<br>(1) ಚಿಕ್ಕಬಾಣಾವರ ಮತ್ತು ಸೋಮಶೆಟ್ಟಿಹಳ್ಳಿ (ಲಕ್ಷ್ಮೀಪುರ ಗ್ರಾಮ ಹೊರತುಪಡಿಸಿ ಉಳಿದ 5 ಗ್ರಾಮಗಳು) ಚಿಕ್ಕಬಾಣಾವರ ಪುರಸಭೆಗೆ ಸೇರ್ಪಡೆಯಾಗಿರುತ್ತವೆ.<br><br>ಸದರಿ ಗ್ರಾಮ ಪಂಚಾಯಿತಿಗಳು ಪುರಸಭೆ/ ನಗರಸಭೆಗೆ ಹಸ್ತಾಂತರವಾದ ದಿನಾಂಕ ಈ ಕೆಳಕಂಡಂತೆ ಇರುತ್ತವೆ.<br>1 — ಲಕ್ಷ್ಮೀಪುರ — 07.07.2021<br>2 — ಚಿಕ್ಕಬಿದರಕಲ್ಲು — 16.07.2021<br>3 — ಶ್ರೀಕಂಠಪುರ — 23.07.2021<br>4 — ಚಿಕ್ಕಬಾಣಾವರ — 07.07.2021<br>5 — ಸೋಮಶೆಟ್ಟಿಹಳ್ಳಿ — 28.06.2021 |
| (ಆ) | ಸದರಿ ಪಂಚಾಯಿತಿಗಳು ಹಸ್ತಾಂತರವಾದ ನಂತರವೂ ಇ-ಸ್ವತ್ತು ಲಾಗಿನ್ ರದ್ದುಗೊಳಿಸದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಲಾಗಿನ್ ರದ್ದುಗೊಳಿಸದಿರಲು ಕಾರಣಗಳೇನು; ಲಾಗಿನ್ ರದ್ದುಗೊಳಿಸಲು ಸರ್ಕಾರ ಕೈಗೊಂಡ ಕ್ರಮವೇನು; | ಸರ್ಕಾರದ ಪತ್ರ ಸಂಖ್ಯೆ: ಗ್ರಾಅಪ 99 ಇ-ಆಡಳಿತ 2021, ದಿನಾಂಕ:09-09-2021 ರಲ್ಲಿ ನಗರ ಸ್ಥಳೀಯ ಸಂಸ್ಥೆಗಳಾಗಿ ಪರಿವರ್ತಿಸಲಾಗಿರುವ ಗ್ರಾಮ ಮತ್ತು ಗ್ರಾಮ ಪಂಚಾಯತಿಗಳನ್ನು ಪಂಚತಂತ್ರ, ಇ-ಸ್ವತ್ತು ಮತ್ತು ಗಾಂಧಿ ಸಾಕ್ಷಿ ಕಾಯಕ ತಂತ್ರಾಂಶಗಳಲ್ಲಿ ತೆಗೆದು ಹಾಕಿ ಸಂಬಂಧಪಟ್ಟ ಗ್ರಾಮ ಪಂಚಾಯತಿಗಳ ಮಾಹಿತಿಯನ್ನು Archive ರಲ್ಲಿ ಇಡಲು ಹಿರಿಯ ತಾಂತ್ರಿಕ ನಿರ್ದೇಶಕರು, ಎನ್.ಐ.ಸಿ. ರವರಿಗೆ ತಿಳಿಸಲಾಗಿದೆ. |
| (ಇ) | ಹಸ್ತಾಂತರವಾದ ನಂತರ ಇ-ಸ್ವತ್ತು ತಂತ್ರಾಂಶದಲ್ಲಿ ತಿದ್ದುಪಡಿ ರದ್ದುಪಡಿಸಿದ್ದು, ಅನುಮೋದನೆ ನೀಡಿದ ಆಸ್ತಿಗಳ ಸಂಖ್ಯೆಯೆಷ್ಟು; (ಪಂಚಾಯಿತಿವಾರು, ಗ್ರಾಮವಾರು ವಿವರ ನೀಡುವುದು) | ಇರುವುದಿಲ್ಲ. |
| (ಈ) | ಹಸ್ತಾಂತರವಾದ ನಂತರವೂ ಇ-ಸ್ವತ್ತು ಲಾಗಿನ್ ಉಪಯೋಗಿಸುವುದು ಕಾನೂನು ಬಾಹಿರವಲ್ಲವೇ; ಈ ರೀತಿ | ಹಸ್ತಾಂತರವಾದ ನಂತರ ಇ-ಸ್ವತ್ತು ತಂತ್ರಾಂಶವನ್ನು ಉಪಯೋಗಿಸಿರುವುದಿಲ್ಲ. |

| | | |
|---|---|---|
| | ಕಾನೂನು ಬಾಹಿರವಾಗಿ ಲಾಗಿನ್ ಉಪಯೋಗಿಸಿದ ಅಧಿಕಾರಿಗಳ ಮೇಲೆ ಸರ್ಕಾರ ಕೈಗೊಂಡ ಕ್ರಮವೇನು; | |
| (ಉ) | ಸದರಿ ಪರಿವರ್ತಿತ ಗ್ರಾಮ ಪಂಚಾಯಿತಿಗಳ ಎಷ್ಟು ಆಸ್ತಿಗಳು ಕಾರ್ಯನಿರ್ವಾಹಕ ಅಧಿಕಾರಿಗಳ ಮತ್ತು ಪಿ.ಡಿ.ಓ. ಲಾಗಿನ್‌ನಲ್ಲಿ ಬಾಕಿಯಿವೆ; ಸದರಿ ಬಾಕಿಯಿರುವ ಆಸ್ತಿಗಳ ಇ-ಸ್ವತ್ತು ವಿತರಣೆಗೆ ಸರ್ಕಾರ ಕೈಗೊಂಡ ಕ್ರಮವೇನು? | ಬಾಕಿ ಇರುವುದಿಲ್ಲ. |

ಸಂ. ಗ್ರಾಅಪ 365 ಗ್ರಾಪಂಅ 2021

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರು.

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು